# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1281 (1453) |
| ಸದಸ್ಯರ ಹೆಸರು | ಶ್ರೀ ಎಸ್ ನಾಗರಾಜ್ (ಸಂದೇಶ್ ನಾಗರಾಜ್) |
| ಉತ್ತರಿಸುವ ದಿನಾಂಕ | 17-03-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರದ ಇತಿಹಾಸ ಪ್ರಸಿದ್ಧವಾದ ಚಾಮರಾಜೇಶ್ವರಿ ದೇವಾಲಯದ ಜೀರ್ಣೋದ್ಧಾರ ಕಾಮಗಾರಿಗಳಿಗೆ ಬಿಡುಗಡೆ ಆಗಿರುವ ಹಣ ಎಷ್ಟು; ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; ದೇವಾಲಯದ ಒಳಾಂಗಣ, ಚಿಕ್ಕ ಗುಡಿಗಳು, ವಿಗ್ರಹಗಳು, ಸುತ್ತುಗೋಪುರದ ಗಾರೆ ಶಿಲ್ಪಗಳು ಇವುಗಳ ಜೀರ್ಣೋದ್ಧಾರ ಮತ್ತು ಸಂರಕ್ಷಣೆಗೆ ಕ್ರಮ ತೆಗೆದುಕೊಳ್ಳಲಾಗಿದೆಯೇ? | ಚಾಮರಾಜನಗರದ ಇತಿಹಾಸ ಪ್ರಸಿದ್ಧವಾದ ಚಾಮರಾಜೇಶ್ವರಿ ದೇವಾಲಯದ ಜೀರ್ಣೋದ್ಧಾರ ಕಾಮಗಾರಿಗೆ 2016-17ನೇ ಸಾಲಿನಲ್ಲಿ ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಿಂದ ರೂ210.00ಲಕ್ಷಗಳ ಅನುದಾನ ಮಂಜೂರಾಗಿದ್ದು, ಪೂರ್ಣವಾಗಿ ದೇವಸ್ಥಾನದ ಜೀರ್ಣೋದ್ಧಾರ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. ಈ ಹಿಂದೆ ಹಾಕಲಾಗಿದ್ದ ಸುಣ್ಣದ ಲೇಪವನ್ನು ಮೂಲ ರೂಪಕ್ಕೆ ತರಲಾಗಿರುತ್ತದೆ.<br><br>ದೇವಸ್ಥಾನದ ರಾಜಗೋಪುರ ಹಾಗೂ ಸುತ್ತಮುತ್ತಲಿನ 96 ಪ್ರಭಾವಳಿಗಳನ್ನು ಸೇರಿ ವಿಮಾನ ಗೋಪುರಗಳನ್ನು ಪೂರ್ಣ ಪ್ರಮಾಣದಲ್ಲಿ ದುರಸ್ಥಿಗೊಳಿಸಿ ಅಭಿವೃದ್ಧಿಗೊಳಿಸಲಾಗಿದೆ. |
| ಆ) | ಚಾಮರಾಜೇಶ್ವರ ರಥದ ನಿರ್ಮಾಣ ಕಾರ್ಯವು ಯಾವ ಹಂತದಲ್ಲಿದೆ; ಯಾವಾಗ ನೂತನ ರಥ ನಿರ್ಮಾಣವಾಗುತ್ತದೆ; ರಥ ನಿಲ್ಲಿಸುವ ರಥದ ಮನೆಯನ್ನು ನವೀಕರಿಸಲಾಗುವುದೇ? | ಚಾಮರಾಜೇಶ್ವರ ರಥದ ನಿರ್ಮಾಣ ಒಟ್ಟು-**14** ಅಡಿ ರಥದ **26** ಫ್ರೇಮ್‌ಗಳಿದ್ದು, ಅದರ ನಿರ್ಮಾಣ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ. ಪುರಾಣದಲ್ಲಿ ಬರುವ ದೇವಾನುದೇವತೆಗಳ ವಿಗ್ರಹಗಳ ಕೆತ್ತನೆ ಕಾಮಗಾರಿ ಪ್ರಗತಿಯಲ್ಲಿದ್ದು, ಮೇ-2021ರ ಕೊನೆ ವಾರದಲ್ಲಿ ಪೂರ್ಣಗೊಳಿಸಲಾಗುವುದು ಹಾಗೂ ಜೂನ್-2021ರ ಮಾಸದಲ್ಲಿ ಲೋಕಾರ್ಪಣೆಗೊಳಿಸಲಾಗುವುದು.<br><br>ರಥ ನಿಲ್ಲಿಸುವ ರಥದ ಮನೆಯನ್ನು ರೂ.20.00ಲಕ್ಷ ಅಂದಾಜು ಮೊತ್ತದ ಕಾಮಗಾರಿಯ ಅಂದಾಜಿಗೆ ತಾಂತ್ರಿಕ ಅನುಮೋದನೆ ದೊರೆತಿದ್ದು, ಟೆಂಡರ್ ಪ್ರಕ್ರಿಯೆ ಹಂತದಲ್ಲಿದೆ. ಟೆಂಡರ್ ಪ್ರಕ್ರಿಯೆ ಮುಗಿದ ನಂತರ ರಥದ ಮನೆಯನ್ನು ನವೀಕರಿಸಲಾಗುವುದು. |

ಸಂಖ್ಯೆ: ಕಂಇ 74 ಮುಸಪ್ರ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.